# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 162 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಕೃಷ್ಣಾರೆಡ್ಡಿ.ಎಂ (ಚಿಂತಾಮಣಿ) |
| 3) | ಉತ್ತರಿಸಬೇಕಾದ ದಿನಾಂಕ | 23/12/2021 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ಐಟಿ-ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು. |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಬಳ್ಳಾಪುರ ಜಿಲ್ಲೆಯ ವ್ಯಾಪ್ತಿಯಲ್ಲಿ ಇಲ್ಲಿಯವರೆಗೆ ಮಂಜೂರಾಗಿರುವ ಸರ್ಕಾರಿ ಐ.ಟಿ.ಐ. ಕಾಲೇಜುಗಳ ಸಂಖ್ಯೆ ಎಷ್ಟು; ಮಂಜೂರಾಗಿರುವ ಕಾಲೇಜುಗಳ ಪೈಕಿ ಎಷ್ಟು ಕಾಲೇಜುಗಳು ಸ್ವಂತ / ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ; (ತಾಲ್ಲೂಕುವಾರು ವಿವರ ನೀಡುವುದು) | ಚಿಕ್ಕಬಳ್ಳಾಪುರ ಜಿಲ್ಲೆಯ ವ್ಯಾಪ್ತಿಯಲ್ಲಿ ಇಲ್ಲಿಯವರೆಗೆ ಮಂಜೂರಾಗಿರುವ ಸರ್ಕಾರಿ ಐ.ಟಿ.ಐ ಕಾಲೇಜುಗಳ ಸಂಖ್ಯೆ:07 (ವಿವರ ಕೆಳಗಿನ ಕೋಷ್ಟಕದಲ್ಲಿ) |

| ಕ್ರ ಸಂ | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಹೆಸರು. | ತಾಲ್ಲೂಕು | ಸ್ವಂತ ಕಟ್ಟಡ/ ಬಾಡಿಗೆರಹಿತ |
|---|---|---|---|
| 1 | ಗೌರಿಬಿದನೂರು | ಗೌರಿಬಿದನೂರು | ಸ್ವಂತ ಕಟ್ಟಡ |
| 2 | ಬಾಗೇಪಲ್ಲಿ | ಬಾಗೇಪಲ್ಲಿ | ಸ್ವಂತ ಕಟ್ಟಡ |
| 3 | ಶಿಡ್ಲಘಟ್ಟ | ಶಿಡ್ಲಘಟ್ಟ | ಸ್ವಂತ ಕಟ್ಟಡ |
| 4 | ಗುಡಿಬಂಡೆ | ಗುಡಿಬಂಡೆ | ಸ್ವಂತ ಕಟ್ಟಡ |
| 5 | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಸ್ವಂತ ಕಟ್ಟಡ |
| 6 | ಮಂಡಿಕಲ್ಲು | ಚಿಕ್ಕಬಳ್ಳಾಪುರ | ಸ್ವಂತ ಕಟ್ಟಡ |
| 7 | ಚಿಂತಾಮಣಿ | ಚಿಂತಾಮಣಿ | ಬಾಡಿಗೆ ರಹಿತ |

ಸ್ವಂತ ಕಟ್ಟಡ ಹೊಂದಿರುವ ಸಂಸ್ಥೆಗಳು:-06
ಬಾಡಿಗೆರಹಿತ ಕಟ್ಟಡ:-01

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಚಿಂತಾಮಣಿ ತಾಲ್ಲೂಕಿಗೆ ಸರ್ಕಾರಿ ಐ.ಟಿ.ಐ ಕಾಲೇಜು ಮಂಜೂರಾಗಿ 4 ವರ್ಷಗಳ ಕಳೆದಿದ್ದು, ಸದರಿ ಕಾಲೇಜಿಗೆ ಈ ತಾಲ್ಲೂಕಿನ ಕಸಬಾ ಹೋಬಳಿಯ ಚಿನ್ನಸಂದ್ರ ಗ್ರಾಮದ ಸರ್ವೆ ನಂ. 194ರಲ್ಲಿ 2 ಎಕರೆ ಜಮೀನು ಮಂಜೂರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಅನುದಾನ ಬಿಡುಗಡೆ ಮಾಡಿ ಕಟ್ಟಡ ಕಾಮಗಾರಿಯನ್ನು ಪ್ರಾರಂಭಿಸಲಾಗುವುದು? (ವಿವರ ನೀಡುವುದು) | ಬಂದಿದೆ.<br>ಚಿಂತಾಮಣಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ 2021-2022ನೇ ಸಾಲಿನಲ್ಲಿ ನಬಾರ್ಡೇತರ ಲೆಕ್ಕಶೀರ್ಷಿಕೆ 4250-00-203-0-07-386 ರಡಿ ರೂ.375.00 ಲಕ್ಷಗಳ ಅನುದಾನದಲ್ಲಿ ಕಟ್ಟಡ ನಿರ್ಮಾಣವನ್ನು ಕೈಗೊಳ್ಳುವಂತೆ ಸರ್ಕಾರದ ಆದೇಶ ಸಂಖ್ಯೆ: ಕೌಉಜೀಇ 36 ಕೈತಶಿ 2021 ಬೆಂಗಳೂರು ದಿನಾಂಕ:11-11-2021ರಲ್ಲಿ ಕ್ರಿಯಾ ಯೋಜನೆಗೆ ಸರ್ಕಾರದ ಅನುಮೋದನೆ ದೊರೆತಿರುತ್ತದೆ.<br><br>ಸದರಿ ಕಟ್ಟಡ ಕಾಮಗಾರಿಯನ್ನು ಸೂಕ್ತ ಸರ್ಕಾರಿ ಸ್ವಾಮ್ಯದ ನಿರ್ಮಾಣ ಏಜೆನ್ಸಿಗೆ ವಹಿಸಿ, ನಿರ್ಮಾಣ ಏಜೆನ್ಸಿಯಿಂದ ಟೆಂಡರ್ ಪ್ರಕ್ರಿಯೆ ಕೈಗೊಂಡು, ಕಟ್ಟಡ ಕಾಮಗಾರಿಯನ್ನು ಪ್ರಾರಂಭಿಸಿ, ನಿಯಮಾನುಸಾರ ನಿಗಧಿತ ಅವಧಿಯಲ್ಲಿ ಕಟ್ಟಡ ಪೂರ್ಣಗೊಳಿಸಲಾಗುವುದು. |

**ಸಂಖ್ಯೆ: ಕೌಉಜೀಇ 93 ಕೈತಪ್ರ 2021**

(ಡಾ.ಸಿ.ಎನ್.ಅಶ್ವತ್ಥ ನಾರಾಯಣ)
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಮತ್ತು
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 480

ಮಾನ್ಯ ಸದಸ್ಯರ ಹೆಸರು : ಡಾ: ಯತೀಂದ್ರ ಸಿದ್ದರಾಮಯ್ಯ (ವರುಣ)

ಉತ್ತರಿಸಬೇಕಾದ ದಿನಾಂಕ : 23.12.2021

ಉತ್ತರಿಸುವ ಸಚಿವರು : ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವರುಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಮೈಸೂರು ತಾಲ್ಲೂಕು ವರುಣ ಗ್ರಾಮದ ಕೆರೆಯನ್ನು ಪ್ರವಾಸೋದ್ಯಮ ತಾಣವನ್ನಾಗಿ ಅಭಿವೃದ್ಧಿಪಡಿಸಲು 2018-19ರಲ್ಲಿ ರೂ.150.00 ಲಕ್ಷಗಳ ಅನುದಾನವನ್ನು ಮಂಜೂರು ಮಾಡಿದ್ದು, ಕಾಮಗಾರಿ ಅನುಮೋದನೆಗೆ ಸಲ್ಲಿಸಿದ್ದ ಪ್ರಸ್ತಾವನೆಯು 2 ವರ್ಷಗಳಿಂದ ಅನುಮೋದನೆಯಾಗದೆ ವಿಳಂಬವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವಾಗ ಅನುಮೋದನೆ ನೀಡಲಾಗುವುದು? | ಸರ್ಕಾರದ ಆದೇಶ ಸಂಖ್ಯೆ: ಪ್ರಇ/250/ಪ್ರವಾಯೋ/2018, ದಿನಾಂಕ: 19-09-2019ರ ಅನುಬಂಧದಲ್ಲಿ ಮೈಸೂರು ವಿಭಾಗದಡಿ ಕ್ರಮ ಸಂಖ್ಯೆ: 6ರಲ್ಲಿ 2018-19ನೇ ಸಾಲಿನಲ್ಲಿ ರೂ.150.00 ಲಕ್ಷಗಳ ಅಂದಾಜುವೆಚ್ಚದಲ್ಲಿ ಮೈಸೂರು ತಾಲ್ಲೂಕಿನ ವರುಣಾ ಕೆರೆಯನ್ನು ಮಾದರಿ ಪ್ರವಾಸಿ ತಾಣವಾಗಿ ಅಭಿವೃದ್ಧಿಪಡಿಸುವ ಕಾಮಗಾರಿಯನ್ನು ಮಂಜೂರು ಮಾಡಿ, ಸದರಿ ಕಾಮಗಾರಿಯನ್ನು ಮೆ: ಕೆ.ಟಿ.ಐ.ಎಲ್. ಸಂಸ್ಥೆಯ ಮೂಲಕ ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.<br><br>ಈ ಕಾಮಗಾರಿಯ ಅನುಷ್ಠಾನ ಸಂಸ್ಥೆಗೆ, ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರುರವರು ದಿನಾಂಕ: 20-09-2018ರ ಅಧಿಕೃತ ಜ್ಞಾಪನದಲ್ಲಿ ರೂ.75.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಿದ್ದರು.<br><br>ಸರ್ಕಾರದ ಆದೇಶ ಸಂಖ್ಯೆ: ಪ್ರಇ 316 ಪ್ರವಾಯೋ 2018, ದಿನಾಂಕ: 23-11-2018ರ ಅನುಬಂಧದ ಕ್ರಮಸಂಖ್ಯೆ: 48ರಲ್ಲಿ ಮೈಸೂರು ತಾಲ್ಲೂಕಿನ ವರುಣ ಕೆರೆಯನ್ನು ಮಾದರಿ ಪ್ರವಾಸಿ ತಾಣವನ್ನಾಗಿ ಅಭಿವೃದ್ಧಿಪಡಿಸುವ ಕಾಮಗಾರಿಗೆ ಸಣ್ಣ ನೀರಾವರಿ ಇಲಾಖೆಯನ್ನು ಅನುಷ್ಠಾನ ಸಂಸ್ಥೆಯಾಗಿ ಗುರುತಿಸಲಾಗಿದೆ. ಅದರಂತೆ, ಸದರಿ ಕಾಮಗಾರಿಗೆ ಕೆ.ಟಿ.ಐ.ಎಲ್. ಶುಲ್ಕ ಕಟಾಯಿಸಿಕೊಂಡು ರೂ.72.37 ಲಕ್ಷಗಳ ಅನುದಾನವನ್ನು ಕಾವೇರಿ ನೀರಾವರಿ ನಿಗಮಕ್ಕೆ ಬಿಡುಗಡೆ ಮಾಡಲಾಗಿತ್ತು.<br><br>ಸರ್ಕಾರದ ಆದೇಶ ಸಂಖ್ಯೆ: ಪ್ರಇ 18 ಟಿಡಿಪಿ 2020, ದಿನಾಂಕ: 13-02-2020ರಲ್ಲಿ ಸದರಿ ಕಾಮಗಾರಿಯನ್ನು ಸಣ್ಣ ನೀರಾವರಿ ಇಲಾಖೆಯ ಬದಲಾಗಿ ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರುರವರ ಮೂಲಕ ಅನುಷ್ಠಾನಗೊಳಿಸಲು ಆದೇಶಿಸಲಾಗಿತ್ತು.<br><br>ಸರ್ಕಾರದ ಆದೇಶ ಸಂಖ್ಯೆ: ಟಿಓಆರ್ 190 ಟಿಡಿಪಿ 2020, ದಿನಾಂಕ: 07-09-2020ರ ಅನುಬಂಧದ ಮೈಸೂರು ವಿಭಾಗದ ಕ್ರಮಸಂಖ್ಯೆ: 17ರಲ್ಲಿ ಮೈಸೂರು ತಾಲ್ಲೂಕಿನ ವರುಣ ಕೆರೆಯನ್ನು ಮಾದರಿ ಪ್ರವಾಸಿ ತಾಣವಾಗಿ ಅಭಿವೃದ್ಧಿಪಡಿಸುವ ಕಾಮಗಾರಿಯನ್ನು ವಿವಿಧ ಕಾರಣಗಳಿಂದ ಇನ್ನು ಪ್ರಾರಂಭ ಮಾಡಲು ಸಾಧ್ಯವಾಗದ ಕಾರಣ ಸದರಿ ಕಾಮಗಾರಿಯನ್ನು ರದ್ದುಪಡಿಸಲಾಗಿದೆ. |

ಸಂಖ್ಯೆ: ಟಿಓಆರ್ 339 ಟಿಡಿಪಿ 2021

(ಆನಂದ್ ಸಿಂಗ್)
ಪ್ರವಾಸೋದ್ಯಮ ಹಾಗೂ ಪರಿಸರ
ಮತ್ತು ಜೀವಿಶಾಸ್ತ್ರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 507
ಮಾನ್ಯ ಸದಸ್ಯರ ಹೆಸರು : ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ)
ಉತ್ತರಿಸಬೇಕಾದ ದಿನಾಂಕ : 23-12-2021
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

* * *

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಸಾಗರ ತಾಲ್ಲೂಕಿನ ಆಸ್ಪತ್ರೆಯಲ್ಲಿ ಪ್ರತಿ ದಿನ 800 ರಿಂದ 1000 ಹೊರ ರೋಗಿಗಳು ಹಾಗೂ 150 ಒಳರೋಗಿಗಳು ದಾಖಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಳೆದ ಮೂರು ವರ್ಷದ ಹೆಚ್.ಎಂ.ಐ.ಎಸ್. ಡೇಟಾ ಅನ್ವಯ ಸಾಗರ ತಾಲ್ಲೂಕು ಆಸ್ಪತ್ರೆಯಲ್ಲಿ ಪ್ರತಿ ದಿನ ಸರಾಸರಿ 350 ರಿಂದ 400 ಹೊರರೋಗಿಗಳು ಹಾಗೂ ಸರಾಸರಿ 70 ರಿಂದ 100 ಒಳರೋಗಿಗಳು ದಾಖಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಸದರಿ ಆಸ್ಪತ್ರೆಯು 100 ಹಾಸಿಗೆಯ ತಾಲ್ಲೂಕು ಮಟ್ಟದ ಆಸ್ಪತ್ರೆಯಾಗಿದ್ದು, ಆಸ್ಪತ್ರೆಯ ಬೆಡ್ ಆಕ್ಯುಪೆನ್ಸಿ ರೇಟ್ ಸರಾಸರಿ 55 ರಿಂದ 65 ಇರುತ್ತದೆ. |
| ಆ | ಬಂದಿದ್ದಲ್ಲಿ, ಸದರಿ ಆಸ್ಪತ್ರೆಯಲ್ಲಿ ಎಂ.ಆರ್.ಐ ಸ್ಕ್ಯಾನಿಂಗ್ ಮತ್ತು ಲ್ಯಾಬ್ ಸೌಕರ್ಯವಿಲ್ಲದೇ ಸಾರ್ವಜನಿಕರು ಶಿವಮೊಗ್ಗಕ್ಕೆ ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಈ ಆಸ್ಪತ್ರೆಯಲ್ಲಿ ಲ್ಯಾಬ್ ಸೌಕರ್ಯವು ಲಭ್ಯವಿದ್ದು, ಸಾರ್ವಜನಿಕರಿಗೆ 67 ಪ್ರಯೋಗಶಾಲಾ ಪರೀಕ್ಷೆಗಳನ್ನು ಉಚಿತವಾಗಿ ಒದಗಿಸಲಾಗುತ್ತಿದೆ. ಎಂ.ಆರ್.ಐ. ಸ್ಕ್ಯಾನಿಂಗ್ ಸೌಲಭ್ಯವು ಸಾಮಾನ್ಯವಾಗಿ ಜಿಲ್ಲಾ ಮಟ್ಟದ ಆಸ್ಪತ್ರೆಗಳಲ್ಲಿ ಮಾತ್ರ ಲಭ್ಯವಿರುತ್ತದೆ. |
| ಇ | ಸದರಿ ಆಸ್ಪತ್ರೆಗೆ ರೇಡಿಯಾಲಜಿ ತಜ್ಞರನ್ನೊಳಗೊಂಡಂತೆ, ಎಂ.ಆರ್.ಐ ಸ್ಕ್ಯಾನಿಂಗ್ ಮತ್ತು ಲ್ಯಾಬ್ ಸೌಕರ್ಯ ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | |
| ಈ | ಹಾಗಿದ್ದಲ್ಲಿ, ಉಪ ವಿಭಾಗೀಯ ಆಸ್ಪತ್ರೆಗೆ ರೇಡಿಯಾಲಜಿ ತಜ್ಞರನ್ನೊಳಗೊಂಡ, ಎಂ.ಆರ್.ಐ ಸ್ಕ್ಯಾನಿಂಗ್ ಮತ್ತು ಲ್ಯಾಬ್ ಸೌಕರ್ಯವನ್ನು ಒದಗಿಸಲು ಇರುವ ತೊಂದರೆಗಳೇನು; ಈ ಬಗ್ಗೆ ಕೈಗೊಂಡ ಕ್ರಮಗಳೇನು? (ಪೂರ್ಣ ವಿವರ ಒದಗಿಸುವುದು) | ಈ ಉಪ ವಿಭಾಗೀಯ ಆಸ್ಪತ್ರೆಗೆ ರೇಡಿಯಾಲಜಿ ತಜ್ಞರ ಮಂಜೂರಾತಿ ಹುದ್ದೆಯು ಇರುವುದಿಲ್ಲ.<br><br>ರೇಡಿಯಾಲಜಿಸ್ಟ್ ಹುದ್ದೆಯ ಮಂಜೂರಾತಿ ಬಗ್ಗೆ ಆಯುಕ್ತರು / ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರಿಂದ ಪ್ರಸ್ತಾವನೆ ಪಡೆದು ಪರಿಶೀಲಿಸಲಾಗುವುದು. |

ಸಂಖ್ಯೆ: ಆಕುಕ 507 ಚುಗುಪ್ರ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 515

ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)

ಉತ್ತರಿಸಬೇಕಾದ ದಿನಾಂಕ : 23-12-2021

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

****

| ಪ್ರಶ್ನೆ | | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರೈತರಿಗೆ 3 ಫೇಸ್ ವಿದ್ಯುತ್ ಎಷ್ಟು ಗಂಟೆ ನೀಡಲಾಗುತ್ತಿದೆ; | ರಾಜ್ಯದಲ್ಲಿ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ಸರ್ಕಾರದ ಆದೇಶದಂತೆ ದಿನವಹಿ 7 ಗಂಟೆಗಳ ಕಾಲ 3-ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ತಾಂತ್ರಿಕವಾಗಿ ಸಾಧ್ಯತೆಯಿರುವ ವಿದ್ಯುತ್ ಉಪಕೇಂದ್ರಗಳಲ್ಲಿ ಹಗಲಿನಲ್ಲಿ 7 ಗಂಟೆಗಳ ಕಾಲ ನಿರಂತರ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
| ಆ) | ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಬೈಲಹೊಂಗಲ ಮತ್ತು ಕಿತ್ತೂರು ತಾಲ್ಲೂಕುಗಳಲ್ಲಿ ರಾತ್ರಿ ವೇಳೆ 3 ಫೇಸ್ ವಿದ್ಯುತ್ ನೀಡುತ್ತಿರುವುದರಿಂದ ರೈತರಿಗೆ ಹಾವು ಕಡಿತ, ರಸ್ತೆ ಅಪಘಾತ ಸಂಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ತಾಂತ್ರಿಕವಾಗಿ ಸಾಧ್ಯತೆಯಿರುವ ವಿದ್ಯುತ್ ಉಪಕೇಂದ್ರಗಳಲ್ಲಿ ಹಗಲಿನಲ್ಲಿ 7 ಗಂಟೆಗಳ ಕಾಲ ನಿರಂತರ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಬೈಲಹೊಂಗಲ ಮತ್ತು ಕಿತ್ತೂರು ತಾಲ್ಲೂಕಿನ ಗ್ರಾಮಗಳ ರೈತರಿಗೆ ರಾತ್ರಿ ವೇಳೆ 3 ಫೇಸ್ ವಿದ್ಯುತನ್ನು ನೀಡುತ್ತಿರುವುದರಿಂದ ಅಪಘಾತ, ಹಾವು ಕಡಿತದಂತಹ ಯಾವುದೇ ಪ್ರಕರಣಗಳು ವರದಿಯಾಗಿರುವುದಿಲ್ಲ. |
| ಇ) | ಬಂದಿದ್ದಲ್ಲಿ, ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಬೈಲಹೊಂಗಲ ಮತ್ತು ಕಿತ್ತೂರು ತಾಲ್ಲೂಕುಗಳಲ್ಲಿ 3 ಫೇಸ್ ವಿದ್ಯುತ್‌ನ್ನು ಸಂಪೂರ್ಣವಾಗಿ ಹಗಲು ವೇಳೆಯಲ್ಲಿ ವಿತರಿಸಲು ಸರ್ಕಾರದ ಕ್ರಮವೇನು? (ಪೂರ್ಣ ವಿವರ ನೀಡುವುದು) | ಹೆಸ್ಕಾಂ ವ್ಯಾಪ್ತಿಯ ಎಲ್ಲಾ ಕೃಷಿ ಪಂಪ್‌ಸೆಟ್ ಫೀಡರ್ ಗಳಿಗೆ ಪ್ರಸ್ತುತ ಸರ್ಕಾರದ ಆದೇಶದಂತೆ ಪ್ರತಿದಿನ 7 ಗಂಟೆಗಳ ಕಾಲ 3-ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಬೈಲಹೊಂಗಲ ಮತ್ತು ಕಿತ್ತೂರು ತಾಲ್ಲೂಕಿನ ಗ್ರಾಮಗಳೂ ಸೇರಿದಂತೆ ಹೆಸ್ಕಾಂ ವ್ಯಾಪ್ತಿಯ ಎಲ್ಲಾ ಕೃಷಿ ಪಂಪ್‌ಸೆಟ್ ಫೀಡರ್ ಗಳಿಗೆ ತಾಂತ್ರಿಕವಾಗಿ ಸಾಧ್ಯತೆಯಿರುವ ವಿದ್ಯುತ್ ಉಪಕೇಂದ್ರಗಳಲ್ಲಿ ಹಗಲಿನಲ್ಲಿ 7 ಗಂಟೆಗಳ ಕಾಲ ನಿರಂತರ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಬೈಲಹೊಂಗಲ ಮತ್ತು ಕಿತ್ತೂರು ತಾಲ್ಲೂಕಿನ ಗ್ರಾಮಗಳ ರೈತರಿಗೆ 3 ಫೇಸ್ ವಿದ್ಯುತನ್ನು ಹಗಲಿನ |

...2

| | | |
|---|---|---|
| | | ವೇಳೆಯಲ್ಲಿ ನಿರಂತರ ಸರಬರಾಜು ಮಾಡಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದ ವತಿಯಿಂದ ಕೈಗೊಂಡ ಕಾಮಗಾರಿಗಳ ವಿವರಗಳು ಕೆಳಕಂಡಂತಿವೆ:<br>1. ತುರ್ಕರ ಶಿಗೆಹಳ್ಳಿಯಲ್ಲಿ 110 ಕೆ.ವಿ. ಉಪಕೇಂದ್ರವನ್ನು ಸ್ಥಾಪಿಸಲು ಟೆಂಡರ್ ಕರೆಯಲಾಗಿದ್ದು, ತಾಂತ್ರಿಕ ಬಿಡ್ ಗಳ ಮೌಲ್ಯಮಾಪನ ಕಾರ್ಯ ಜಾರಿಯಲ್ಲಿರುತ್ತದೆ.<br>2. ತಿಗಡಿಯಲ್ಲಿ 110 ಕೆ.ವಿ. ವಿದ್ಯುತ್ ಉಪ ಕೇಂದ್ರವನ್ನು ಸ್ಥಾಪಿಸಲು ಈಗಾಗಲೇ ಟೆಂಡರ್ ಕರೆಯಲಾಗಿರುತ್ತದೆ. |

ಸಂಖ್ಯೆ: ಎನರ್ಜಿ 327 ಪಿಪಿಎಂ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 664 |
| ಸದಸ್ಯರ ಹೆಸರು | : | ಡಾ॥ ರಂಗನಾಥ್ ಹೆಚ್.ಡಿ. (ಕುಣಿಗಲ್) |
| ಉತ್ತರಿಸಬೇಕಾದ ದಿನಾಂಕ | : | 23-12-2021 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

***

| | ಪ್ರಶ್ನೆ | ಉತ್ತರ |
|---|---|---|
| ಅ) | ಕುಣಿಗಲ್ ತಾಲ್ಲೂಕಿನಲ್ಲಿ ರೈತರಿಗೆ ವಿದ್ಯುತ್ ಪ್ರವರ್ತಕ ವಿತರಿಸಿ (ಟಿ.ಸಿ.) ಶೀಘ್ರ ಸಂಪರ್ಕ ನೀಡುವಲ್ಲಿ ಅಧಿಕಾರಿಗಳು ವಿಳಂಬ ದೋರಣೆ ಅನುಸರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಕುಣಿಗಲ್ ತಾಲ್ಲೂಕಿನಲ್ಲಿ ಶೀಘ್ರ ಸಂಪರ್ಕ ಯೋಜನೆಡಿಯಲ್ಲಿ ರೈತರಿಗೆ ವಿದ್ಯುತ್ ಪರಿವರ್ತಕ ವಿತರಿಸುವಲ್ಲಿ ಶೀಘ್ರ ಸಂಪರ್ಕ ನೀಡುವಲ್ಲಿ ಅಧಿಕಾರಿಗಳ ವಿಳಂಬ ದೋರಣೆ ಕಂಡು ಬಂದಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ತಾಲ್ಲೂಕಿನಲ್ಲಿ 200 ರೈತರು ತತ್ಕಾಲ ಯೋಜನೆ ಅಡಿ ವಿದ್ಯುತ್ ಪ್ರವರ್ತಕ ಪಡೆಯಲು ಹಣ ಕಟ್ಟಿದ್ದು, ಲಕ್ಷಾಂತರ ರೂಪಾಯಿ ಕಂಬ ಮತ್ತು ತಂತಿ ಅಳವಡಿಸಿಕೊಂಡು, ವರ್ಷಗಳಿಂದ ಕಾಯುತ್ತಿದ್ದಾರೆ. ಆದರೆ ವಿದ್ಯುತ್ ಪ್ರವರ್ಕಗಳನ್ನು ಈವರೆವಿಗೂ ವಿತರಿಸಿರುವುದಿಲ್ಲ. ವಿದ್ಯುತ್ ಪ್ರವರ್ತಕಗಳನ್ನು ಯಾವ ಕಾಲಮಿತಿಯಲ್ಲಿ ಅಳವಡಿಸಲಾಗುವುದು; ವಿದ್ಯುತ್ ಪ್ರವರ್ತಕಗಳನ್ನು ಅಳವಡಿಸುವಲ್ಲಿ ವಿಳಂಬ ದೋರಣೆ ಅನುಸರಿಸುತ್ತಿರುವ ಅಧಿಕಾರಿಗಳ ವಿರುದ್ಧ ಯಾವ ರೀತಿಯ ಕ್ರಮ ಕೈಗೊಳ್ಳಲಾಗುವುದು; | ದಿನಾಂಕ:14.07.2014 ರ ಸುತ್ತೋಲೆಯನ್ವಯ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಕುಣಿಗಲ್ ತಾಲ್ಲೂಕಿನಲ್ಲಿ ತತ್ಕಾಲ್ ಯೋಜನೆಯಡಿಯಲ್ಲಿ 2014 ರಿಂದ ನವಂಬರ್-2021 ರವರಗೆ ಒಟ್ಟಾರೆ 579 ಅರ್ಜಿಗಳು ನೋಂದಣಿಯಾಗಿದ್ದು,<br>• 550 ಅರ್ಜಿಗಳಿಗೆ ಕಾರ್ಯಾದೇಶ ನೀಡಲಾಗಿದ್ದು. ಅದರಲ್ಲಿ<br>• 486 ಅರ್ಜಿಗಳಿಗೆ ಪರಿವರ್ತಕಗಳನ್ನು ವಿತರಿಸಲಾಗಿದೆ.<br>• 64 ಅರ್ಜಿಗಳಿಗೆ ಪರಿವರ್ತಕಗಳನ್ನು ವಿತರಿಸಲು ಬಾಕಿ ಇರುತ್ತವೆ.<br>• 29 ಅರ್ಜಿಗಳು ಕಂಪನಿ ನಿಯಮವನ್ನು ಪಾಲಿಸಲು ಅರ್ಜಿದಾರರಿಂದ ಬಾಕಿ ಇರುತ್ತವೆ.<br>• ಬಾಕಿ ಇರುವ 64 ಅರ್ಜಿಗಳಿಗೆ 25 ಕೆವಿಎ ಪರಿವರ್ತಕಗಳು ಸರಬರಾಜು ಆದ ತಕ್ಷಣ ಆದ್ಯತೆಯ ಮೇರೆಗೆ ರೈತರಿಗೆ ವಿದ್ಯುತ್ ಪರಿವರ್ತಕ ವಿತರಿಸಿ ಸಂಪರ್ಕವನ್ನು ನೀಡಲಾಗುವುದು.<br>ರೈತರಿಗೆ ವಿದ್ಯುತ್ ಪರಿವರ್ತಕ ಲಭ್ಯತೆಯ ಮೇರೆಗೆ ಪರಿವರ್ತಕ ವಿತರಿಸುವಲ್ಲಿ ಅಧಿಕಾರಿಗಳ ವಿಳಂಬ ದೋರಣೆಯು ಕಂಡು ಬಂದಿರುವುದಿಲ್ಲ. |
| ಇ) | ಯಾವುದೇ ಯೋಜನೆಯ ವಿದ್ಯುತ್ ಪರಿವರ್ತಕಗಳು ಸುಟ್ಟು ಹೋದರೆ ಬದಲಿಸಲು ಮತ್ತು ಅಳವಡಿಸಲು ಕೆಳಹಂತದ ಸಿಬ್ಬಂದಿಯಿಂದ ಶೋಷಣೆಯಾಗುತ್ತಿರುವ ಬಗ್ಗೆ ದೂರುಗಳು ಕೇಳಿ ಬಂದಿದ್ದು, ಗ್ರಾಮೀಣ ಪ್ರದೇಶದಲ್ಲಿ ತಂತಿ | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ಪರಿವರ್ತಕಗಳು ಸುಟ್ಟು ಹೋದಲ್ಲಿ ಕೂಡಲೇ ಬೆವಿಕಂನ ಗ್ರಾಹಕದೂರು ಕೇಂದ್ರದ ದೂರವಾಣಿ ಸಂಖ್ಯೆ 1912 ಅಥವಾ ಸಂಬಂಧಪಟ್ಟ ಅಧಿಕಾರಿಗಳಿಗೆ ದೂರನ್ನು ಸಲ್ಲಿಸಬಹುದಾಗಿರುತ್ತದೆ. ಸಂಬಂಧಿಸಿದ ಶಾಖಾಧಿಕಾರಿಗಳು ಗ್ರಾಹಕದೂರು ಕೇಂದ್ರದಲ್ಲಿ ದಾಖಲಿಸಿದ ದೂರಿನ ಮೇರೆಗೆ ಅಥವಾ ಸ್ವಂತ ದಾಖಲಿಸಿದ ದೂರಿನ ಮೇರೆಗೆ ಡಾಕೆಟ್ ನಂಬರ್ ನ್ನು ಬೆವಿಕಂನ ಗ್ರಾಹಕದೂರು ಕೇಂದ್ರದಿಂದ ಪಡೆದು, ಸ್ಥಳ ಪರಿಶೀಲಿಸಿ |

| | | |
|---|---|---|
| | ಮಾರ್ಗ ಬದಲಿಸುವ ವಿಚಾರದಲ್ಲಿ ರೈತರಿಂದ ಸುಲಿಗೆಯಾಗುತ್ತಿದ್ದು, ಇದನ್ನು ತಡೆಗಟ್ಟಲು ಸರ್ಕಾರ ಯಾವ ರೀತಿಯ ಕ್ರಮಗಳನ್ನು ಕೈಗೊಂಡಿದೆ ಹಾಗೂ ಇಂತಹ ಅಧಿಕಾರಿಗಳು/;ಸಿಬ್ಬಂದಿಯ ವಿರುದ್ಧ ಯಾವ ರೀತಿಯ ಕ್ರಮಗಳನ್ನು ಕೈಗೊಂಡಿದೆ? | ಪರಿವರ್ತಕ ಸುಟ್ಟು ಹೋಗಿರುವ ಬಗ್ಗೆ ಖಚಿತ ಪಡಿಸಿಕೊಂಡು, 24 ಗಂಟೆಯೊಳಗೆ ವಿಫಲವಾದ ಪರಿವರ್ತಕಗಳನ್ನು ಸಕಾಲದಲ್ಲಿ ಬದಲಾಯಿಸಿ ವಿದ್ಯುತ್ ಪೂರೈಸಲಾಗುತ್ತಿದೆ.<br><br>ನಗರ ಪ್ರದೇಶಗಳಲ್ಲಿ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ 24 ಗಂಟೆಗಳ ಒಳಗಾಗಿ ವಿಫಲಗೊಂಡ ಎಲ್ಲಾ ವಿಫಲವಾದ ಪರಿವರ್ತಕಗಳನ್ನು ಬದಲಾಯಿಸಲು ಬೆವಿಕಂ ವ್ಯಾಪ್ತಿಯಲ್ಲಿ ತಾಲ್ಲುಕುವಾರು 46 ದುರಸ್ತಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದು, ವಿಫಲವಾದ ಪರಿವರ್ತಕಗಳನ್ನು ಕೂಡಲೇ ದುರಸ್ತಿಗೊಳಿಸಲಾಗುತ್ತಿದೆ. ದಿನಾಂಕ:10.12.2021 ರ ಅಂತ್ಯಕ್ಕೆ ಬೆವಿಕಂನ ವಿವಿಧ ಪರಿವರ್ತಕಗಳ ಬ್ಯಾಂಕ್‌ಗಳಲ್ಲಿ ಹಾಗೂ ವಿಭಾಗೀಯ ಉಗ್ರಾಣಗಳಲ್ಲಿ ಒಟ್ಟಾರೆ 3276 ಸಂಖ್ಯೆಯ ವಿವಿಧ ಸಾಮರ್ಥ್ಯದ ಹೊಸ/ದುರಸ್ತಿಗೊಂಡ ಪರಿವರ್ತಕಗಳನ್ನು ದಾಸ್ತಾನು ಇರಿಸಲಾಗಿದೆ.<br><br>ರೈತರಿಗೆ ವಿದ್ಯುತ್ ಪೂರೈಸುವಲ್ಲಿ ತೊಂದರೆಯಾಗದಂತೆ ಬೆವಿಕಂ ವತಿಯಿಂದ ಪರಿವರ್ತಕವನ್ನು ಅಳವಡಿಸುವ ತನಕ ತಾತ್ಕಾಲಿಕವಾಗಿ ಸಮೀಪದಲ್ಲಿರುವ ಪರಿವರ್ತಕದಿಂದ ತಾಂತ್ರಿಕ ಸಾಧ್ಯತೆಗನುಗುಣವಾಗಿ ಜಾಲ ಸಂಪರ್ಕ ನೀಡಿ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ಪರಿವರ್ತಕಗಳು ಸುಟ್ಟುಹೋದಲ್ಲಿ 24 ಗಂಟೆಗಳಲ್ಲಿ ಬದಲಾವಣೆ ಮಾಡಲಾಗುತ್ತಿದೆ. ಬೆವಿಕಂ ನಲ್ಲಿ ಪರಿವರ್ತಕ ಬದಲಾವಣೆ/ತಂತಿ ಮಾರ್ಗಗಳ ಬದಲಾವಣೆ ವಿಚಾರದಲ್ಲಿ ಕೆಳ ಹಂತದ ಸಿಬ್ಬಂಧಿಗಳಿಂದ ಶೋಷಣೆಯಾಗುತ್ತಿರುವ ಕುರಿತು ಯಾವುದೇ ಪ್ರಕರಣಗಳು ದಾಖಲಾಗಿರುವುದಿಲ್ಲ. ಅಂತಹ ಯಾವುದೇ ಪ್ರಕರಣಗಳು ಕಂಡುಬಂದಲ್ಲಿ ಸೂಕ್ತ ಕ್ರಮ ಕೈಗೊಳ್ಳಲಾಗುವುದು.<br><br>ಗ್ರಾಮೀಣ ಪ್ರದೇಶದಲ್ಲಿ ತಂತಿ ಮಾರ್ಗ (ವಿದ್ಯುತ್ ಮಾರ್ಗಗಳನ್ನು) ಬದಲಾಯಿಸಲು ಸ್ವಂತ ಕೋರಿಕೆ ಮೇರೆಗೆ ರೈತರು ಸ್ವಯಂ ಕಾರ್ಯ ಯೋಜನೆಯಡಿಯಲ್ಲಿ ಅರ್ಜಿ ಸಲ್ಲಿಸಿದಲ್ಲಿ ಕೆ.ಇ.ಆರ್.ಸಿ. ನಿಯಮಾನುಸಾರ ಅಂದಾಜು ಮೊತ್ತದ ಶೇಕಡಾ 10% ಮೇಲ್ವಿಚಾರಣಾ ಶುಲ್ಕವನ್ನು ಬೆವಿಕಂಗೆ ಪಾವತಿಸಿ ಕಾರ್ಯನಿರ್ವಹಿಸಿಕೊಳ್ಳುತ್ತಿರುತ್ತಾರೆ.<br><br>ಅಪಾಯಕಾರಿ ಸ್ಥಳಗಳಲ್ಲಿರುವ ವಿದ್ಯುತ್ ಮಾರ್ಗಗಳು ಕಂಡು ಬಂದಲ್ಲಿ ಬೆವಿಕಂ ವತಿಯಿಂದ ಸುರಕ್ಷಿತ ಸ್ಥಳಕ್ಕೆ ಸ್ಥಳಾಂತರಿಸುವ ಕಾಮಗಾರಿಗಳನ್ನು ನಿರ್ವಹಿಸಲಾಗುತ್ತಿದೆ. ಕೆಪೆಕ್ಸ್ ಕಾಮಗಾರಿಗಳ ಅಡಿಯಲ್ಲಿ ಅವಶ್ಯಕತೆಯಿರುವ ಹೆಚ್.ಟಿ/ಎಲ್.ಟಿ ಮಾರ್ಗಗಳ ವಾಹಕ ಬದಲಾವಣೆ ಕಾಮಗಾರಿಗಳನ್ನು ಬೆವಿಕಂ ವತಿಯಿಂದ ನಿರ್ವಹಿಸಲಾಗುತ್ತಿದೆ. |

ಸಂಖ್ಯೆ: ಎನರ್ಜಿ 328 ಪಿಪಿಎಂ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು